CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೪ (ಮಾಘ ೨, ಶಕ ವರ್ಷ ೧೯೨೫) | ಸಂಚಿಕೆ ೦೪

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯ ವಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು**

**"ಸಪೋಟ ಫಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ"**

**ಸಂಖ್ಯೆ:ಹಿಸತೋನಿ:ರಾವ:ಬೆಂಗ್ರಾ:ತಾಸ:106:03-04 ದಿನಾಂಕ: 2ನೇ ಜನವರಿ 2004**

2004ನೇ ಸಾಲಿನ ಒಂದನೇ ಅವಧಿಯ ಅಂದರೆ, ದಿನಾಂಕ: 01.01.2004 ರಿಂದ 30.06.2004 ರವರೆಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-1 ರವರ ಅಧೀನದಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರಗಳ ಸಪೋಟ ಫಸಲಿನ ವಿಲೇವಾರಿಗೆ ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ರೀತ್ಯ ಟೆಂಡರ್ ಪ್ರಕಟಣೆ ಹೊರಡಿಸಿ ಸದರಿ ಕ್ಷೇತ್ರದ ಹೆಸರಿನ ಮುಂದೆ ನಮೂದಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ನಡೆಸಲು ನಿಗದಿಪಡಿಸಿದೆ. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹಣ್ಣಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ಹೆಸರು | ಫಸಲು | ಗಿಡಗಳ ಸಂಖ್ಯೆ | ಠೇವಣಿ ಮೊತ್ತ | ಟೆಂಡರ್ ನಡೆಸುವ ದಿನ ಮತ್ತು ವೇಳೆ |
|---|---|---|---|---|---|
| 1. | ಇಂದಿರಾನಗರ ಕ್ಷೇತ್ರ, ಬೆಂಗಳೂರು ನಗರ | ಸಪೋಟ | 164 | 2000 | 12.02.2004 ಮ 3.30 ಗಂಟೆ |
| 2. | ಬಗಿನಗೆರೆ ಕಾವಲ್ ಕ್ಷೇತ್ರ, ಮಾಗಡಿ ತಾಲ್ಲೂಕು. | ಸಪೋಟ | 650 | 2000 | 16.02.2004 ಮ 3.30 ಗಂಟೆ |
| 3. | ತಿಪ್ಪಗೊಂಡನಹಳ್ಳಿ ಕ್ಷೇತ್ರ, ನೆಲಮಂಗಲ ತಾಲ್ಲೂಕು | ಸಪೋಟ | 700 | 5000 | 17.02.2004 ಮ 3.30 ಗಂಟೆ |

ಟೆಂಡರ್ ಫಾರಂಗಳನ್ನು ರೂ.25.00 ಪಾವತಿ ಮಾಡಿ ಪಡೆಯಬೇಕು. ಟೆಂಡರ್‌ದಾರರು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಅಥವಾ ಕ್ಷೇತ್ರದ ಅಧಿಕಾರಿಯ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್‌ದಾರರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಟೆಂಡರ್ ತೆರೆಯುವ ದಿನಾಂಕದಂದು ಮಧ್ಯಾಹ್ನ 3.00 ಗಂಟೆಗೆ ಅಥವಾ ಅದಕ್ಕೂ ಮೊದಲ ಆಯಾಯ ಕ್ಷೇತ್ರಗಳಲ್ಲಿ ಸಲ್ಲಿಸಬೇಕು. ಟೆಂಡರ್ ಫಾರಂನಲ್ಲಿ ಟೆಂಡರ್‌ದಾರರು ತಾವು ದಾಖಲಿಸುವ ಮೊತ್ತವನ್ನು ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿ ಸಹಿ ಮಾಡಿರಬೇಕು. ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು

ಟೆಂಡರ್ ಅನುಮೋದನೆಯಾದ ದಿನಾಂಕದಿಂದ ಪೂರ್ಣ ಮೊಬಲಗು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬಹುದು. ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೆ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳನ್ನು ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯ ವಲಯ) ಗ್ರಾಮಾಂತರ
ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-560 001

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯ ವಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ,**

**ಕಬ್ಬನ್ ಉದ್ಯಾನವನ, ಬೆಂಗಳೂರು**

**"ಸಪೋಟ ಫಸಲಿನ ವಿಲೇವಾರಿಗೆ ಟೆಂಡರ್ ಕಂ-ಹರಾಜು ಪ್ರಕಟಣೆ"**

**ಸಂಖ್ಯೆ:ಹಿಸತೋನಿ:ರಾವ:ಬೆಂಗ್ರಾ:ತಾಸ:106:03-04 ದಿನಾಂಕ: 2ನೇ ಜನವರಿ 2004**

2004ನೇ ಸಾಲಿನ ಒಂದನೇ ಅವಧಿಯ ಅಂದರೆ, ದಿನಾಂಕ: 01.01.2004 ರಿಂದ 30.06.2004 ರವರೆಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-1 ರವರ ಅಧೀನದಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರಗಳ ಸಪೋಟ ಫಸಲಿನ ಟೆಂಡರ್ ಕಂ ಬಹಿರಂಗ ಹರಾಜನ್ನು ಸದರಿ ಕ್ಷೇತ್ರಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ನಡೆಸಲು ನಿಗದಿಪಡಿಸಿದೆ. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹಣ್ಣಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಇದರಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ಹೆಸರು | ಫಸಲು | ಗಿಡಗಳ ಸಂಖ್ಯೆ | ಠೇವಣಿ ಮೊತ್ತ | ಟೆಂಡರ್ ಕಂ ಹರಾಜು ನಡೆಸುವ ದಿನ ಮತ್ತು ವೇಳೆ |
|---|---|---|---|---|---|
| 1. | ರಾಮನಗರ ಕ್ಷೇತ್ರ, ರಾಮನಗರ ಟೌನ್ | ಸಪೋಟ | 109 | 2000 | 04.02.2004 ಬೆ 11.30 ಗಂಟೆ |
| 2. | ಚೆನ್ನಪಟ್ಟಣ ಕ್ಷೇತ್ರ, ಚೆನ್ನಪಟ್ಟಣ ಟೌನ್ | ಸಪೋಟ | 25 | 1000 | 04.02.2004 ಮ 3.30 ಗಂಟೆ |
| 3. | ಕನಕಪುರ ಕ್ಷೇತ್ರ, ಕನಕಪುರ ಟೌನ್ | ಸಪೋಟ | 144 | 2000 | 05.02.2004 ಬೆ 11.30 ಗಂಟೆ |
| 4. | ಬೈರಮಂಗಲ ಕ್ಷೇತ್ರ, ರಾಮನಗರ ತಾಲ್ಲೂಕು | ಸಪೋಟ | 149 | 2000 | 10.02.2004 ಬೆ 11.30 ಗಂಟೆ |
| 5. | ದೊಡ್ಡ ಬಳ್ಳಾಪುರ ಕ್ಷೇತ್ರ, ದೊಡ್ಡ ಬಳ್ಳಾಪುರ ಟೌನ್ | ಸಪೋಟ | 295 | 1000 | 11.02.2004 ಬೆ 11.30 ಗಂಟೆ |

ಟೆಂಡರ್ ಫಾರಂಗಳನ್ನು ರೂ. 25.00 ಪಾವತಿ ಮಾಡಿ ಪಡೆಯಬೇಕು. ಟೆಂಡರ್‌ದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಜೊತೆಯಲ್ಲಿ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಮತ್ತು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಗ್ರಾಮಾಂತರ ಜಿಲ್ಲೆ, ಬೆಂಗಳೂರು, ಅಥವಾ ಕ್ಷೇತ್ರದ ಅಧಿಕಾರಿಯ ಹೆಸರಿನಲ್ಲಿ ಪಡೆದು ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಇತ್ಯಾದಿಗಳನ್ನು ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಹರಾಜು ನಡೆಸುವ ದಿನಾಂಕದಂದು ಬೆ.11.00 ಗಂಟೆ ಒಳಗೆ ಅಥವಾ ಅದಕ್ಕೂ ಮೊದಲು ಆಯಾಯ ಕ್ಷೇತ್ರಗಳಲ್ಲಿ ಸಲ್ಲಿಸಬಹುದು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ಟೆಂಡರ್ ಹಾಗೂ ಬಿಡ್ಡಿನ ಮೊತ್ತಗಳಲ್ಲಿ ಅತೀ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತೀ ಹೆಚ್ಚಿನ ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇ 50 ಭಾಗದ ಮೊತ್ತವನ್ನು ಸ್ಥಳದಲ್ಲಿಯೇ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಟೆಂಡರ್ ಕಂ ಹರಾಜು ಅನುಮೋದನೆಯಾದ ದಿನಾಂಕದಿಂದ ಪೂರ್ಣ ಮೊಬಲಗು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬಹುದು ಟೆಂಡರ್ ಕಂ ಹರಾಜು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳನ್ನು ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಆಯಾಯ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯ ವಲಯ)
ಪಿಆರ್. 38 ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-560 001

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**
**ಕಾರ್ಯನಿರ್ವಾಹಕ ಇಂಜಿನಿಯರ್(ವಿ) ರವರ ಕಾರ್ಯಾಲಯ, ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ, ಕ.ವಿ.ಪ್ರ.ನಿ.ನಿ ಬೆಂಗಳೂರು-560009**

**ಸಂಖ್ಯೆ:ಇಇಇ: ಬೆಂಬೃಕಾಉವಿ:ಎಇಇ-4:ಕ-28:03-04/146 ದಿನಾಂಕ: 31ನೇ ಡಿಸೆಂಬರ್ 2003**

ಕ.ವಿ.ಪ್ರ.ನಿ.ನಿ ಯು 1948 ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 28ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 29 (ii) ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

1) ಯೋಜನೆಯ ಹೆಸರು : ಬೆಂಗಳೂರಿನ ವಿಜಯನಗರ, ಪಾದರಾಯನಪುರ ವ್ಯಾಪ್ತಿಯ ಟೆಲಿಕಾಂ ಬಡಾವಣೆಯಲ್ಲಿ 2 x 20 ಎಂ.ವಿ.ಎ. 66/11 ಕೆ.ವ್ಹಿ. ವಿದ್ಯುತ್ ಉಪ ಕೇಂದ್ರವನ್ನು ಸ್ಥಾಪಿಸುವ ಸಂಬಂಧ ಮತ್ತು 220 ಕೆ.ವ್ಹಿ. ಎನ್.ಆರ್.ಎಸ್. ವಿದ್ಯುತ್ ಕೇಂದ್ರದಿಂದ ಉದ್ದೇಶಿತ ಟೆಲಿಕಾಂ ಬಡಾವಣೆಯ 66/11 ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ 66 ಕೆ.ವ್ಹಿ. ಜೋಡಿ ಮಾರ್ಗದ ಭೂಗತ ಕೇಬಲ್ ಹಾಕುವುದು.

2) ಯೋಜನೆಯ ಪ್ರಯೋಜನಗಳು: ಬೆಂಗಳೂರಿನ ವಿಜಯನಗರ ಮತ್ತು ಪಾದರಾಯನಪುರದ ಸುತ್ತಮುತ್ತಲಿನ ಪ್ರದೇಶಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

3) 66. ಕೆ.ವ್ಹಿ. ಭೂಗತ ಕೇಬಲ್ ಹಾದುಹೋಗುವ ಮಾರ್ಗ:
   ಅ ರಾಜಾಜಿನಗರದ ಕಾರ್ಡ್‌ರಸ್ತೆ
   ಆ 72ನೇ ಅಡ್ಡ ರಸ್ತೆ, ರಾಜಾಜಿನಗರ 5ನೇ ಬ್ಲಾಕ್
   ಇ 12ನೇ ಮುಖ್ಯ ರಸ್ತೆ ರಾಜಾಜಿನಗರ 6ನೇ ಬ್ಲಾಕ್
   ಈ ಮಹಾನಗರ ಪಾಲಿಕೆಯ ಸಮುದಾಯ ಭವನ ವೃತ್ತ
   ಉ ಡಾ. ರಾಜಕುಮಾರ್ ರಸ್ತೆ
   ಊ ಪ್ರಸನ್ನ ವೃತ್ತ
   ಋ ಮಾಗಡಿ ಮುಖ್ಯ ರಸ್ತೆ
   ೠ ಚೋಳೂರು ಪಾಳ್ಯ ಮುಖ್ಯ ರಸ್ತೆ
   ಎ ಪೈಪ್ ಲೈನ್ ಮುಖ್ಯ ರಸ್ತೆ
   ಏ ಕುವೆಂಪು ವೃತ್ತ ಮತ್ತು
   ಐ ಪಾದರಾಯನಪುರ ಮುಖ್ಯ ರಸ್ತೆಯ ಮೂಲಕ ಉದ್ದೇಶಿತ 66/11 ಕೆ.ವ್ಹಿ. ಟೆಲಿಕಾಂ ಬಡಾವಣೆಯ ಉಪ ವಿದ್ಯುತ್ ಸ್ಥಾವರದವರೆಗೆ.

4) ಅಂದಾಜು ವೆಚ್ಚ: ರೂ. 704.90 ಲಕ್ಷಗಳು

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (iii) ರ (ಕೇಂದ್ರೀಯ ಕಾಯಿದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

**ಎಸ್. ಎ. ಗೋವಿಂದರಾಜು**
ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ, ಕ.ವಿ.ಪ್ರ.ನಿ.ನಿ. ಬೆಂಗಳೂರು-09

ಪಿಡಿ.3

**ಜಿಲ್ಲಾ ಪೊಲೀಸ್ ಅಧೀಕ್ಷಕರವರ ಕಛೇರಿ, ಕೊಪ್ಪಳ**
**ಬಹಿರಂಗ ಹರಾಜು ಪ್ರಕಟಣೆ**

**ಸಂ: ಎಂಟಿ: ಹರಾಜು: 2003-04 ದಿನಾಂಕ: 29ನೇ ಡಿಸೆಂಬರ್ 2003**

**ವಿಷಯ :** ವಾಹನಗಳ ಹಳೆಯ ಟೈರ್, ಟ್ಯೂಬ್, ಬ್ಯಾಟರಿ ಮತ್ತು ಇತರ ನಿರುಪಯುಕ್ತ ಬಿಡಿಭಾಗಗಳನ್ನು ಬಹಿರಂಗವಾಗಿ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರಕಾರದ ಆದೇಶ ಸಂ: ಹೆಚ್‌ಡಿ: 198:ಇಎಂವಿ: 2000: ಬೆಂಗಳೂರು, ದಿನಾಂಕ: 19.06.03.
2. ಪ್ರಧಾನ ಕಛೇರಿಯ ಹಿಂಬರಹ ಸಂ.ವಾ.ಸಾ (3) 1:97-98, ದಿನಾಂಕ: 17.07.03.

ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ತಿಳಿಯಪಡಿಸುವುದೇನೆಂದರೆ, ದಿನಾಂಕ: 02.02.2004 ರಂದು ಬೆಳಿಗ್ಗೆ 11.00 ಘಂಟೆಗೆ ಈ ಕೆಳಕಂಡ ನಿರುಪಯುಕ್ತ ಟೈರ್, ಟ್ಯೂಬ್, ಬ್ಯಾಟರಿ ಮತ್ತು ಇತರೆ ನಿರುಪಯುಕ್ತ ಬಿಡಿಭಾಗಗಳನ್ನು ಕೊಪ್ಪಳ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ ವಿವರ ಈ ಕೆಳಗಿನಂತಿರುತ್ತದೆ.

**ಅ) ಒಟ್ಟು 254 ಟೈರ್, ಟ್ಯೂಬ್ ಮತ್ತು: ಫ್ಲಾಪ್ಸ್: 1997 ರಿಂದ 10/03 ರವರೆಗೆ**

**ಆ) ಒಟ್ಟು 69 ಬ್ಯಾಟರಿಗಳು: 1997 ರಿಂದ 10/03 ರವರೆಗೆ**

1) 12-ವಿ, 13-ಪಿ ಬ್ಯಾಟರಿಗಳು -41 2) 12-ವಿ, 11-ಪಿ ಬ್ಯಾಟರಿಗಳು -10
3) 12-ವಿ, 21-ಪಿ ಬ್ಯಾಟರಿಗಳು -04 4) 6-ವಿ, 7-ಪಿ ಬ್ಯಾಟರಿಗಳು - 12
5) 12-ವಿ, 2.5 ಎಹೆಚ್ ಬ್ಯಾಟರಿಗಳು - 02

ಇ) **ವಾಹನದ ಬಿಡಿಭಾಗಗಳು:** **1997 ರಿಂದ 10/03 ರವರೆಗೆ**

| | | |
|---|---|---|
| 1) 48 - ಶಾಕ್‌ಅಬ್ಸರ್ವರ್‍ಸ್ | 2) 16- ಕ್ಲಚ್ ಪ್ಲೇಟ್ಸ್ | 3) 18-ಟೈ ರಾಡ್ ಎಂಡ್ಸ್ |
| 4) 10 - ಪಿಸ್ಟನ್ | 5) 16 ಸೆಟ್-ವಾಲ್ವ್ಸ್ | 6) 4 ಸೆಟ್ - ಸ್ಲೀವ್ಸ್ |
| 7) 59 - ಬೇರಿಂಗ್ಸ್ | 8) 15 ಸೆಟ್ - ಬ್ರೇಕ್ ಲೈನರ್‍ಸ್ | 9) 13 - ಸ್ಪ್ರಿಂಗ್ ಪ್ಲೇಟ್ಸ್ |
| 10) 4- ಗ್ಯಾಸ್ಕೆಟ್ಸ್ | 11) 12 - ವ್ಹೀಲ್ ಸಿಲಿಂಡರ್ ಕಿಟ್ಸ್ | 12) 1 - ವಾಟರ್‌ಬಾಡಿ ಅಸೆಂಬ್ಲಿ |
| 13) 2 - ರೇಡಿಯೇಟರ್ ಅಸೆಂಬ್ಲಿ | 14) 1 - ಡೀಸೆಲ್ ಟ್ಯಾಂಕ್ | 15) 4 - ವ್ಹೀಲ್ ಡಿಸ್ಕ್ |
| 16) 8 - ಹೆಡ್‌ಲೈಟ್ ಅಸೆಂಬ್ಲಿ | 17) 1 - ಆರ್ಮೇಚರ್ | |

ಈ) **ಸ್ಕ್ರ್ಯಾಪ್ಸ್: (ಅಂದಾಜು 3 ಕ್ವಿಂಟಲ್)** **1997 ರಿಂದ 10/03 ರವರೆಗೆ**

**ಹರಾಜಿನ ನಿಬಂಧನೆಗಳು:**

1) ನಿರುಪಯುಕ್ತ ಟೈರ್, ಟ್ಯೂಬ್, ಬ್ಯಾಟರಿ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
2) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ನಗದು ರೂಪದಲ್ಲಿ ರೂ. 5,000=00 ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸಕ್ಕದ್ದು. ಹರಾಜು ಪ್ರಾರಂಭವಾದ ನಂತರ ಬಿಡ್‌ದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ. ಠೇವಣಿ ಕಟ್ಟದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3) ಆಸಕ್ತ ಬಿಡ್‌ದಾರರು (ಸಹಕಾರ ಸಂಘಗಳು ಮತ್ತು ಇತರೆ ಸಂಸ್ಥೆಗಳು ಸೇರಿದಂತೆ) ಮುಚ್ಚಿದ ಲಕೋಟೆಯಲ್ಲಿ ಟೆಂಡರ್‌ನ್ನು ಸಲ್ಲಿಸತಕ್ಕದ್ದು. "ವಾಹನದ ನಿರುಪಯುಕ್ತ ಬಿಡಿ ಭಾಗಗಳನ್ನು, ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಖರೀದಿಸುವ ಬಗ್ಗೆ" ಎಂದು ಲಕೋಟೆಯ ಮೇಲೆ ಬಿಡಿ ಅಕ್ಷರಗಳಲ್ಲಿ ನಮೂದಿಸಿ, ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಖುದ್ದಾಗಿ ಸಲ್ಲಿಸತಕ್ಕದ್ದು.
4) ಪೂರ್ಣಗೊಳಿಸಿದ ಟೆಂಡರ್‌ಗಳನ್ನು ದಿನಾಂಕ: 28.01.2004 ರಂದು ಸಂಜೆ 5.00 ಘಂಟೆಯ ಒಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
5) ಪೊಲೀಸ್ ಅಧೀಕ್ಷಕರು, ಕೊಪ್ಪಳ ರವರು ಬಹಿರಂಗ ಹರಾಜು ನಡೆಸುವರು.
6) ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಇದ್ದರೆ ಆ ಸ್ಥಳದಲ್ಲಿಯೇ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
7) ಟೆಂಡರ್‌ನ್ನು ಸಲ್ಲಿಸಿದ ಬಿಡ್‌ದಾರರಿಂದ ಅಥವಾ ಠೇವಣಿ ತುಂಬಿದ ಬಿಡ್‌ದಾರರಿಂದ ಹರಾಜು ನಡೆಯುವ ದಿನದಂದು ಬಹಿರಂಗ ಬಿಡ್‌ಗಳನ್ನು ಪಡೆಯಲಾಗುವುದು.
8) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ. ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಬಿಡ್‌ದಾರರೆಂದು ಪರಿಗಣಿಸಲಾಗುವುದು.
9) ನಿರುಪಯುಕ್ತ ವಾಹನದ ಬಿಡಿಭಾಗಗಳ ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ತೆರಿಗೆಯನ್ನು ವಿಧಿಸಲಾಗುವುದು.
10) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11) ಜಯಗಳಿಸಿದ ಬಿಡ್‌ದಾರರು ಹರಾಜಿನ ಒಟ್ಟು ಮೊತ್ತವನ್ನು ನಗದು ರೂಪದಲ್ಲಿ ತಕ್ಷಣದಲ್ಲಿಯೇ ಮಾರಾಟ ತೆರಿಗೆ ಮುಂತಾದವುಗಳನ್ನು ಸೇರಿಸಿ, ಹರಾಜಿನ ದಿನವೇ ತುಂಬತಕ್ಕದ್ದು. ಡಿ.ಡಿ. ಮತ್ತು ಚೆಕ್ ಮುಖಾಂತರ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
12) ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದವಿವಾದ ಉದ್ಭವಿಸಿದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
13) ಹರಾಜು ಮಾಡಲಾದ ನಿರುಪಯುಕ್ತ ಬಿಡಿಭಾಗಗಳನ್ನು, ಟೈರ್, ಟ್ಯೂಬ್ ಹಾಗೂ ಬ್ಯಾಟರಿಗಳನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
14) ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
15) ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರು ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್ ದಾರರು ಮುಂಗಡವಾಗಿ ಕಟ್ಟಲಾದ ಹಣದಲ್ಲಿ ವಸೂಲಿ ಮಾಡುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ದವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
16) ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನದ ಬಿಡಿಭಾಗಗಳನ್ನು ಟೈರ್ ಮತ್ತು ಟ್ಯೂಬ್‌ಗಳನ್ನು ಹಾಗೂ ಬ್ಯಾಟರಿಗಳನ್ನು ಪರಿಶೀಲಿಸಬಹುದು.

ಜಿಲ್ಲಾ ಪೊಲೀಸ್ ಅಧೀಕ್ಷಕರು,
ಕೊಪ್ಪಳ.

ಪಿಆರ್.26

# ಕೃಷಿ ಇಲಾಖೆ

## ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ, ಉಡುಪಿ ಜಿಲ್ಲೆ

**ಸಂ:ಸಕೃನಿ:ಕುಂ:ಲೆಕ್ಕ: 3:ವಾವಿ: 03-04 ದಿನಾಂಕ: 9ನೇ ಜನವರಿ 2004**

**ವಿಷಯ :** ಈ ಕಛೇರಿ ವಾಹನ ಸಂ. ಎಂಇಜಿ: 9956 ಜೀಪನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** ದಿನಾಂಕ: 10.7.2002 ರಂದು ಅಪರಾಹ್ನ 4.30 ಗಂಟೆಗೆ ಉಡುಪಿ ಜಿಲ್ಲಾ ಸರ್ಕಾರಿ ನಿರುಪಯುಕ್ತ ವಾಹನಗಳ ವಿಲೇವಾರಿ ಸಮಿತಿ ಸಭೆಯ ನಡವಳಿಗಳು.

ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ, ಉಡುಪಿ ಜಿಲ್ಲೆ ಇವರ ಕಛೇರಿಯ ವಾಹನ ಸಂ:ಎಂಇಜಿ 9956 ಜೀಪನ್ನು ಕೆಳಗೆ ವಿವರಿಸಿದ ನಿಬಂಧನೆಗಳಿಗೆ ಒಳಪಟ್ಟು ಟೆಂಡರ್ ಆವರಣದಲ್ಲಿ ಜೀಪ್‌ಶೆಡ್‌ನಲ್ಲಿ ಯಾವ ರೀತಿ ಇದೆಯೋ ಅದೇ ರೀತಿ ದಿನಾಂಕ: 11.3.2004 ರಂದು ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಈ ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ದೃಢಸವಾಲು ಮಾಡಬೇಕೆಂದು ಈ ಮೂಲಕ ಕೋರಲಾಗಿದೆ.

| | | | |
|---|---|---|---|
| 1) | ವಾಹನ ಮಾದರಿ ಮತ್ತು ನೋಂದಣಿ ಸಂಖ್ಯೆ | : | 1980 ಮಾದರಿ ಮಹೀಂದ್ರ ಎಂಇಜಿ 9956 ಜೀಪ್ |
| 2) | ವಿಕ್ರಯದ ತರಹ | : | ಟೆಂಡರ್ ಮತ್ತು ಬಹಿರಂಗ ಹರಾಜು |
| 3) | ವಿಕ್ರಯದ ಸ್ಥಳ | : | ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕುಂದಾಪುರ ಕಛೇರಿ ಆವರಣ. |
| 4) | ಟೆಂಡರ್ ಸ್ವೀಕರಿಸುವ ಕಡೆಯ ದಿನಾಂಕ ಮತ್ತು ವೇಳೆ, ಸ್ಥಳ | : | ದಿನಾಂಕ: 3.3.2004 ಮಧ್ಯಾಹ್ನ 3.00 ಗಂಟೆ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಕುಂದಾಪುರ. |
| 5) | ಹರಾಜಿನ ದಿನಾಂಕ ಮತ್ತು ವೇಳೆ | : | ದಿನಾಂಕ: 11.03.04 ವೇಳೆ ಬೆಳಿಗ್ಗೆ 11.00 ಗಂಟೆಗೆ |
| 6) | ಬಹಿರಂಗ ಹರಾಜು ಮಾಡುವ ಸ್ಥಳ | : | ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಆವರಣ, ಕುಂದಾಪುರ, ಉಡುಪಿ ಜಿಲ್ಲೆ |
| 7) | ನಿಗದಿಪಡಿಸುವ ಠೇವಣಿ ಹಣ | : | ರೂ.2000 (ಎರಡು ಸಾವಿರ ರೂ. ಮಾತ್ರ) |

**ನಿಬಂಧನೆಗಳು:**

1. ದಿನಾಂಕ: 11.3.2004 ರಂದು ಟೆಂಡರುಗಳನ್ನು ಬಹಿರಂಗ ಹರಾಜಿನ ನಂತರ ಹರಾಜಿನ ಸ್ಥಳದಲ್ಲಿ ತೆರೆಯಲಾಗುವುದು.
2. ಮೇಲ್ಕಂಡ ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛೆಯುಳ್ಳವರು ವಾಹನಕ್ಕೆ ರೂ.2000 (ಎರಡು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಠೇವಣಿಯಾಗಿ ಹರಾಜಿನ ಪ್ರಾರಂಭಕ್ಕೆ ಮುಂಚಿತವಾಗಿಯೇ ಕಟ್ಟಬೇಕು.
3. ಮೊಹರಾದ ಟೆಂಡರ್‌ಗಳನ್ನು ಬಿಳಿಯ ಹಾಳೆಯಲ್ಲಿ ಬಿಡ್ ಮಾಡುವ ಬೆಲೆಯನ್ನು ಅಂಕೆಗಳಲ್ಲಿ ಮತ್ತು ದಪ್ಪ ಅಕ್ಷರಗಳಲ್ಲಿ ನಮೂದಿಸಿ ತಮ್ಮ ಪೂರ್ಣ ಸಹಿ, ಅಂಚೆ ವಿಳಾಸವನ್ನು ಬರೆದು ಡಿಮ್ಯಾಂಡ್ ಡ್ರಾಫ್ಟ್ ಸಹಿತ ಮೊಹರು ಮಾಡಿ ಟೆಂಡರ್‌ಗಳನ್ನು ಪ್ರತ್ಯೇಕವಾದ ಲಕೋಟೆಯಲ್ಲಿ ಈ ಕಛೇರಿ ವೇಳೆಯಲ್ಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಕುಂದಾಪುರ, ಉಡುಪಿ ಜಿಲ್ಲೆ ವಿಳಾಸಕ್ಕೆ ತಲುಪಿಸತಕ್ಕದ್ದು. ಲಕೋಟೆಯ ಮೇಲೆ ಟೆಂಡರ್ ಸಹಿ ಬಹಿರಂಗ ಹರಾಜು ವಾಹನ ಸಂ. ಎಂಇಜಿ 9956 ಎಂದು ನಮೂದಿಸತಕ್ಕದ್ದು.
4. ಯಶಸ್ವಿ ಟೆಂಡರುದಾರರು ಬಿಡ್‌ದಾರರು ಮಾರಾಟ ತೆರಿಗೆಯನ್ನು ಸರ್ಕಾರದ ನಿಯಮದಂತೆ ಪಾವತಿ ಮಾಡತಕ್ಕದ್ದು.
5. ವಾಹನವನ್ನು ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ ಇವರ ಕಛೇರಿ ಆವರಣದಲ್ಲಿ ಜೀಪ್ ಶೆಡ್‌ನಲ್ಲಿ ಕಛೇರಿಯ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪರೀಕ್ಷಿಸಬಹುದು.
6. ಜಯಪ್ರದವಾದ ಟೆಂಡರ್ ಹರಾಜಿನ ನಿರ್ಣಯವನ್ನು ಅತ್ಯುನ್ನತ ಘೋಷಿತ ಅಥವಾ ಅಧಿಕ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.
7. ಕರೆಯಲಾಗಿರುವ ಈ ಟೆಂಡರ್ ಹರಾಜು ಪ್ರಕಟಣೆಯನ್ನು ಯಾವುದೇ ವಿವಾದವಾದ ಪಕ್ಷದಲ್ಲಿ ತಿರಸ್ಕರಿಸುವ: ಮುಂದುವರೆಸುವ ಹಾಗೂ ರದ್ದುಪಡಿಸುವ ಹಕ್ಕುಗಳು ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ ಇವರಿಗೆ ಇರುತ್ತದೆ.
8. ಈ ಹರಾಜಿನಲ್ಲಿ ಎಲ್ಲಾ ವಿಷಯದಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ ಮತ್ತು ಭಾಗವಹಿಸುವ ಟೆಂಡರ್‌ದಾರರು ಮತ್ತು ಹರಾಜು ಬಿಡ್‌ದಾರರು ಈ ತೀರ್ಮಾನಕ್ಕೆ ಬದ್ಧರಾಗಿರುತ್ತಾರೆ.
9. ವಾಹನ ಹರಾಜಿಗೆ ಸಂಬಂಧಿಸಿದಂತೆ ಸರ್ಕಾರ ಮತ್ತು ಇಲಾಖೆಯ ಅನುಮೋದನೆ ಪಡೆದು ತಿಳಿಸಿದ ನಂತರ ಜಯಶೀಲನಾದ ಟೆಂಡರ್‌ದಾರ: ಹರಾಜುದಾರರಿಗೆ ತಿಳಿಸಿದ ನಿಗದಿತ 7 ದಿನಗಳೊಳಗೆ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ, ವಾಹನವನ್ನು ಅವರ ಸ್ವಂತ ಖರ್ಚಿನಲ್ಲಿ ಹರಾಜಿನ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು. ಯಾವ ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಈ ನಿಯಮವನ್ನು ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿ ಹಣವನ್ನು ಸರ್ಕಾರದ ಖಾತೆಗೆ ಯಾವ ರೀತಿ ತಿಳುವಳಿಕೆ ಕೊಡದೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಜಯಶೀಲನಾದ ಟೆಂಡರ್‌ದಾರ: ಹರಾಜುದಾರರನ್ನುಳಿದು ಇತರರ ಮುಂಗಡ ಠೇವಣಿಗಳನ್ನು ಹರಾಜು ಪೂರ್ಣವಾದ ನಂತರ ಹರಾಜು ಸ್ಥಳದಲ್ಲಿ ಹಿಂತಿರುಗಿಸಲಾಗುವುದು.

ಪಿಆರ್. 36

ಸಹಾಯಕ ಕೃಷಿ ನಿರ್ದೇಶಕರು, ಕುಂದಾಪುರ.

**ನಿರ್ದೇಶನಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು – 560 001**

**ಪ್ರಕಟಣೆ ಸಂಖ್ಯೆ ನಿಪಸಂ/ಸಿಬ್ಬಂದಿ–2/ವಿವ–53/2003-04 ಬೆಂಗಳೂರು ದಿನಾಂಕ: 22.01.2004**

**ಭರ್ತಿಮಾಡಿದ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕ: 27.02.2004**

**ಅಧಿಸೂಚನೆ**

ಸರ್ಕಾರದ ಅಧಿಸೂಚನೆ ಸಂಖ್ಯೆ ಎಹೆಚ್‌ಎಫ್/408/ವಿಎಹೆಚ್/2001 ದಿನಾಂಕ: 12.11.2003 ಹಾಗೂ ಸರ್ಕಾರದ ಪತ್ರ ಸಂಖ್ಯೆ. ಪಸಂಮೀ/408/ಪಸಸೆ/2001 ದಿನಾಂಕ: 10.12.2003 ರಲ್ಲಿ ಅನುಮತಿ ದೊರೆತ ಮೇರೆಗೆ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ 250 ಪಶುವೈದ್ಯಾಧಿಕಾರಿಗಳ **ಬಿ** ಗುಂಪಿನ ಹುದ್ದೆಗಳನ್ನು (ವೇತನ ಶ್ರೇಣಿ. 6300-11840) ಕರ್ನಾಟಕ ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆ (ಪಶುವೈದ್ಯಾಧಿಕಾರಿಗಳ ನೇರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು 2003 ರನ್ವಯ ಆಯ್ಕೆಗಾಗಿ ಪರಿಗಣಿಸಲು ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಯನ್ನು ಈ ಪ್ರಕಟಣೆಯಲ್ಲಿ ಕಾಣಿಸಿರುವ ನಮೂನೆಯಲ್ಲಿ ಬೆರಳಚ್ಚು ಮಾಡಿದ/ಗಣಕೀಕೃತ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಕೈಬರಹದ/ಜೆರಾಕ್ಸ್/ಮುದ್ರಿತ ಅಥವಾ ಇತರೆ ಯಾವುದೇ ಆಯ್ಕೆ ಆಯೋಗದ ಅರ್ಜಿಗಳನ್ನು ಒಪ್ಪಲಾಗುವುದಿಲ್ಲ.

1. ಆಯ್ಕೆಯನ್ನು ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ ಗಳಿಸಿದ ಒಟ್ಟು ಶೇಕಡಾವಾರು ಅಂಕಗಳ ಅರ್ಹತೆ ಆಧಾರದ ಮೇಲೆ ಹಾಗೂ ಮೀಸಲಾತಿಗನುಗುಣವಾಗಿ ನಡೆಸಲಾಗುವುದು.
2. **ನಿಗದಿತ ವಿದ್ಯಾರ್ಹತೆ:** ಅಧಿಸೂಚನೆ ಹೊರಡಿಸಿದ ದಿನಾಂಕದಂದು ಅಭ್ಯರ್ಥಿಯು ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯನ್ನು ಪಡೆದಿರಬೇಕು ಹಾಗೂ ಭಾರತೀಯ ಪಶುವೈದ್ಯಕೀಯ ಪರಿಷತ್ತಿನ ಕಾಯ್ದೆ 1984ರ ಅಡಿಯಲ್ಲಿ ನೋಂದಣಿಯಾಗಿರಬೇಕು.
3. **ವಯೋಮಿತಿ:** ಅಭ್ಯರ್ಥಿಗಳಿಂದ ಪೂರ್ಣಗೊಳಿಸಿದ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಅಂತಿಮ ದಿನಾಂಕದಂದು ನಿಗಧಿಪಡಿಸಿದ ಕನಿಷ್ಠ ವಯೋಮಿತಿಯಲ್ಲಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು. ವಯೋಮಿತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್/04/ಎಸ್‌ಆರ್‌ಆರ್/95 ದಿನಾಂಕ: 25.07.1995 ರ ಮೇರೆಗೆ ನಿಗದಿಪಡಿಸಲಾಗಿದೆ.

| | |
|---|---|
| ಕನಿಷ್ಠ | 18 ವರ್ಷಗಳು |
| ಗರಿಷ್ಠ | 33 ವರ್ಷಗಳು |
| ಪ್ರವರ್ಗ IIಎ, IIಬಿ<br>ಪ್ರವರ್ಗ IIಎ, IIIಬಿ | 36 ವರ್ಷಗಳು |
| ಪಜಾ, ಪಪಂ. ಪ್ರವರ್ಗ–I | 38 ವರ್ಷಗಳು |

3.1 ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಂತೆಯಾಗಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಎ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ;

**ಅಥವಾ**

(ಬಿ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ದೋಷ ಪೂರಿತನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ದಾಟಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು; ಅಥವಾ

(ಸಿ) ಸ್ವಂತ ಕೋರಿಕೆ ಮೇರೆಗೆ ಅಲ್ಲದೆ ಸಂಸ್ಥೆಯ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ; ಅಥವಾ

(ಡಿ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ವರ್ತನೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯ ಪರಿಗಣಿಸಿದ ಮತ್ತು ಅವರಿಗೆ ಗ್ರಾಚುಯಿಟಿ ನೀಡಿರುವ ವ್ಯಕ್ತಿಯಲ್ಲದ ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಪ್ರಾಂತ್ಯದ ಸೇನೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು ಸೇರ್ಪಡೆಯಾಗುತ್ತಾರೆ.

(i) ನಿರಂತರ ಸೇವೆ ಸಲ್ಲಿಸಿ ನಿವೃತ್ತಿಹೊಂದಿದ ಪಿಂಚಣಿದಾರರು

(ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಮರ್ಥತೆ ಹೊಂದಿ ಬಿಡುಗಡೆಯಾದ ವ್ಯಕ್ತಿ

(iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:–** ಕೇಂದ್ರ, ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ "ಮಾಜಿ ಸೈನಿಕ" ನೆಂಬ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

3.2 ಅಭ್ಯರ್ಥಿಯು ನ್ಯಾಷನಲ್ ಕ್ಯಾಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

4. **<u>ಹುದ್ದೆಗಳ ವರ್ಗೀಕರಣ:</u>** ವಿವಿಧ ಪ್ರವರ್ಗಗಳಿಗೆ ಮೀಸಲಾತಿ ವಿವರಗಳನ್ನು ಕೆಳಗೆ ಒದಗಿಸಲಾಗಿದೆ. ಆದಾಗ್ಯೂ ಪ್ರಕಟಿತ ಹುದ್ದೆಗಳಿಗಿಂತ ಕಡಿಮೆ ಸಂಖ್ಯೆಯ ಹುದ್ದೆಗಳಿಗೆ ಆಯ್ಕೆಯನ್ನು ನಡೆಸಬಹುದಾದ ಹಕ್ಕು (ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ)/ಅಧಿಕಾರ ಆಯ್ಕೆ ಸಮಿತಿಗೆ ಇದೆ.

| | ಒಟ್ಟು | ಮ.ಅ. | ಮಾ.ಸೈ. | ಗ್ರಾ.ಅ | ಕ.ಮಾ.ಅ | ಇತರೆ |
|---|---|---|---|---|---|---|
| ಪ್ರವರ್ಗ– I | 10 | 03 | 01 | 03 | - | 03 |
| ಪ್ರವರ್ಗ– IIA | 38 | 12 | 03 | 10 | 02 | 11 |
| ಪ್ರವರ್ಗ– IIB | 10 | 03 | 01 | 03 | - | 03 |
| ಪ್ರವರ್ಗ– IIIA | 10 | 03 | 01 | 03 | - | 03 |
| ಪ್ರವರ್ಗ– IIIB | 12 | 04 | 01 | 03 | - | 04 |
| ಪಜಾ | 38 | 12 | 03 | 10 | 02 | 11 |
| ಪ.ಪಂ | 07 | 02 | - | 02 | - | 03 |
| ಸಾಮಾನ್ಯ ಅರ್ಹತೆ | 125 | 38 | 12 | 31 | 06 | 38 |
| ಒಟ್ಟು | 250 | 77 | 22 | 65 | 10 | 76 |

ಮೇಲೆ ಕಾಣಿಸಿರುವ ವರ್ಗೀಕರಣವು ಮೀಸಲಾತಿ ಆದೇಶಗಳಲ್ಲಿ ಮಾರ್ಪಾಡು ಆದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

4.1 ಅಂಗವಿಕಲರಿಗೆ ಮತ್ತು ಯೋಜನೆಗಳಿಂದ ಸಂತ್ರಸ್ತರಾದ ಅಭ್ಯರ್ಥಿಗಳಿಗೆ ಮೀಸಲಾತಿ ಸೌಲಭ್ಯ ಇರುವುದಿಲ್ಲ.

4.2 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಥವಾ ಪ್ರವರ್ಗ–I ಅಥವಾ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದವರೆಂದು ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ/132/ಎಸ್‌ಎಡಿ/97(1) ದಿನಾಂಕ: 08.02.2000 ರಲ್ಲಿ ನಿಗದಿಪಡಿಸಿದ ಹಾಗೂ ಅನ್ವಹಿಸುವ ನಮೂನೆ "ಡಿ" ಅಥವ "ಇ" ಅಥವಾ "ಎಫ್" ನಲ್ಲಿ ಜಾತಿ ಅಥವಾ ಜಾತಿ/ಆದಾಯ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗಿರುವಂತೆ ಪಡೆದು ಸಲ್ಲಿಸುವುದು, ಇಲ್ಲವಾದಲ್ಲಿ ಅಂತಹ ಅಭ್ಯರ್ಥಿಗಳನ್ನು ಸಾಮಾನ್ಯ ಅರ್ಹತೆಯಲ್ಲಿ ಪರಿಗಣಿಸಲಾಗುವುದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ "ಡಿ" ಯಲ್ಲಿ ಸಂಬಂಧಿತ ತಹಶೀಲ್ದಾರ್‌ರಿಂದ ಪಡೆದ ಮಿಸಲಾತಿ ಪ್ರಮಾಣ ಪತ್ರವನ್ನು ಅಥವಾ ಸಂಬಂಧಿತ ಜಿಲ್ಲಾ ಜಾತಿ ಪರಿಶೀಲನಾ ಸಮಿತಿಯಿಂದ ನಮೂನೆ–Iಎ ರಲ್ಲಿ ಪಡೆದ ಸಿಂಧುತ್ವ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಒಂದು ವೇಳೆ, ಸಂಬಂಧಿತ ತಹಸೀಲ್ದಾರ್‌ರವರಿಂದ ನಿಗಧಿತ ಕೊನೆಯ ದಿನಾಂಕದೊಳಗಾಗಿ, ನಿಗಧಿತ ನಮೂನೆಯಲ್ಲಿ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದುಕೊಳ್ಳಲು ಸಾಧ್ಯವಾಗದಿದ್ದಲ್ಲಿ, ಅಂತಹವರು ನಮೂನೆ "ಎ" ನಲ್ಲಿ ಪ್ರಮಾಣ ಪತ್ರವನ್ನು ನೀಡುವಂತೆ ಸಂಬಂಧಿತ ತಹಶೀಲ್ದಾರ್‌ರಿಗೆ ಸಲ್ಲಿಸಿದ ಅರ್ಜಿ ಹಾಗೂ ಅದರೊಂದಿಗಿನ ಪ್ರಮಾಣೀಕರಿಸಿದ ಘೋಷಣಾ ಪತ್ರದ ಪ್ರತಿಯನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ತೆಗೆದಿರಿಸಿಕೊಂಡು, ಅದರ ಪ್ರತಿಯನ್ನು ನಮೂನೆ "ಡಿ"ಯೊಂದಿಗೆ ಅರ್ಜಿಯೊಡನೆ ಲಗತ್ತಿಸತಕ್ಕದ್ದು.

ಆ) ಪ್ರವರ್ಗ–Iಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ "ಇ" ನಲ್ಲಿ ಸಂಬಂಧಿತ ತಹಶೀಲ್ದಾರ್‌ರಿಂದ ಪಡೆದ ಮೀಸಲಾತಿ ಪ್ರಮಾಣ ಪತ್ರವನ್ನು ಅಥವಾ ಸಂಬಂಧಿತ ಜಿಲ್ಲಾ ಜಾತಿ ಪರಿಶೀಲನಾ ಸಮಿತಿಯಿಂದ ನಮೂನೆ– I ಎ ರಲ್ಲಿ ಪಡೆದ ಸಿಂಧುತ್ವ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಒಂದು

ವೇಳೆ, ಸಂಬಂಧಿತ ತಹಶೀಲ್ದಾರ್‌ರಿಂದ ನಿಗಧಿತ ಕೊನೆಯ ದಿನಾಂಕದೊಳಗಾಗಿ, ನಿಗಧಿತ ನಮೂನೆಯಲ್ಲಿ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದುಕೊಳ್ಳಲು ಸಾಧ್ಯವಾಗದಿದ್ದಲ್ಲಿ ಅಂತಹವರು ನಮೂನೆ "ಬಿ" ನಲ್ಲಿ ಪ್ರಮಾಣ ಪತ್ರವನ್ನು ನೀಡುವಂತೆ ಸಂಬಂದಿತ ತಹಸೀಲ್ದಾರ್‌ರವರಿಗೆ ಸಲ್ಲಿಸಿದ ಅರ್ಜಿ ಹಾಗೂ ಅದರೊಂದಿಗಿನ ಪ್ರಮಾಣೀಕರಿಸಿದ ಘೋಷಣಾ ಪತ್ರದ ಪ್ರತಿಯನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ತೆಗೆದಿರಿಸಿಕೊಂಡು, ಅದರ ಪ್ರತಿಯನ್ನು ನಮೂನೆ "ಇ"ಯೊಂದಿಗೆ ಅರ್ಜಿಯೊಡನೆ ಲಗತ್ತಿಸತಕ್ಕದ್ದು.

ಇ) ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ, ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಜಾತಿ ಮತ್ತು ಆದಾಯವನ್ನು ಧೃಢೀಕರಿಸುವ ಬಗ್ಗೆ ಪ್ರಮಾಣ ಪತ್ರವನ್ನು ನಿಗಧಿಪಡಿಸಿದ ನಮೂನೆ "ಎಫ್" ನಲ್ಲಿ ಸಂಬಂದಿತ ತಹಶೀಲ್ದಾರ್‌ರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ, ಮೀಸಲಾತಿಯನ್ನು ಕೋರಬಯಸುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರಿಂದ ನಿಗಧಿತ ಕೊನೆಯ ದಿನಾಂಕದೊಳಗಾಗಿ, ನಿಗಧಿಪಡಿಸಿದ ನಮೂನೆಯಲ್ಲಿ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದುಕೊಳ್ಳಲು ಸಾಧ್ಯವಾಗದಿದ್ದಲ್ಲಿ ಅಂತಹವರು ನಮೂನೆ "ಸಿ" ನಲ್ಲಿ ಪ್ರಮಾಣ ಪತ್ರವನ್ನುನೀಡುವಂತೆ ಸಂಬಂಧಿತ ತಹಶೀಲ್ದಾರ್‌ರವರಿಗೆ ಸಲ್ಲಿಸಿದ ಅರ್ಜಿ ಹಾಗೂ ಅದರೊಂದಿಗಿನ ಪ್ರಮಾಣೀಕರಿಸಿದ ಘೋಷಣಾ ಪತ್ರದ ಪ್ರತಿಯನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ತೆಗೆದಿರಿಸಿಕೊಂಡು, ಅದರ ಪ್ರತಿಯನ್ನು ನಮೂನೆ "ಎಫ್"ರೊಡನೆ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

4.3. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಹೊರತುಪಡಿಸಿ ಉಳಿದಂತೆ ಯಾವುದೇ ಪ್ರವರ್ಗಗಳ ಅಭ್ಯರ್ಥಿಗಳಲ್ಲಿ ಕೊರತೆಯಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿಮಾಡುವ ಅಧಿಕಾರ ಆಯ್ಕೆ ಸಮಿತಿಗಿದೆ.

5. ಗ್ರಾಮೀಣ ಆಬ್ಯರ್ಥಿಗಳೆಂದು ಮೀಸಲಾತಿ ಬಯಸುವವರು ಸರ್ಕಾರದ ಆದೇಶ ಸಂಖ್ಯೆ. ಡಿಪಿಎಆರ್/06/ಎಸ್‌ಆರ್‌ಆರ್/2000 ದಿನಾಂಕ: 13.02.2001 ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಿದ ನಮೂನೆ–2 ರಲ್ಲಿ ಅಭ್ಯರ್ಥಿಗಳು ಉತ್ತೀರ್ಣರಾದ ಸಂಸ್ಥೆಯ ಪ್ರಾಂಶುಪಾಲರು / ಮುಖ್ಯೋಪಾಧ್ಯಾಯರು / ಮುಖ್ಯೋಪಾಧ್ಯಾಯಿನಿಯರಿಂದ ಕ್ಷೇತ್ರ ಶಿಕ್ಷಣಾಧಿಕಾರಿಯ ಮೇಲು ಸಹಿಯೊಂದಿಗೆ ಪಡೆಯಬೇಕು. ಈ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ಅಂತಿಮವಾಗಿ ವ್ಯಾಸಂಗಮಾಡಿದ ಸಂಸ್ಥೆ / ಶಾಲೆಗಳಲ್ಲಿ ಅಭ್ಯಾಸ ಮಾಡಿದ್ದಲ್ಲಿ ಈ ಬಗ್ಗೆ ಆ ಎಲ್ಲಾ ಸಂಸ್ಥೆಗಳಲ್ಲಿ ತಪಾಸಣೆ ಆಗಿರಬೇಕು.

ಅ) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಧಿಸೂಚನೆ ಸಂಖ್ಯೆ. ಸಂವ್ಯಶಾಇ.59 ಶಾಸನ 2000, ದಿನಾಂಕ: 06.01.2001 ರಲ್ಲಿ ಕರ್ನಾಟಕ ಗ್ರಾಮೀಣ ಆಬ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿಗಾಗಿ ವಿಧೇಯಕ 2000 ದಡಿ ಅವಕಾಶ ಕಲ್ಪಿಸಿ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸರ್ಕಾರವು ದಿನಾಂಕ: 13.02.2001 ರಲ್ಲಿ ಜಾರಿಗೊಳಿಸಲಾದ ಆದೇಶ ಸಂಖ್ಯೆ ಸಿಆಸುಇ 08 ಸೆಸೆನಿ 2001 ನಿಯಮಗಳ ಕಂಡಿಕೆ 3, 4 ಹಾಗೂ 5(1) ರಿಂದ (3) ರನ್ನು ಈ ಕೆಳಗೆ ಉದ್ಧರಿಸಿದೆ.

3. ಸದರಿ ಅಧಿನಿಯದಲ್ಲಿ ಗ್ರಾಮೀಣ ಆಭ್ಯರ್ಥಿಯನ್ನು ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

i) ಗ್ರಾಮೀಣ ಆಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ;

4. ಈ ಹಿನ್ನೆಲೆಯಲ್ಲಿ ಮೇಲೆ ವಿವರಿಸಿದ ಅಂಶಗಳನ್ನು ಒಳಗೊಂಡ, ಅಂದರೆ (1) ವ್ಯಾಸಂಗ (Study) (2) ಮೀಸಲಾತಿಯ ವರ್ಗ ಮತ್ತು (3) ಮೇಲುಸ್ತರದ ಪರಿಕಲ್ಪನೆ (Creamy Layer Concept) ಈ ಅಂಶಗಳನ್ನು ಒಳಗೊಂಡ ಪ್ರಮಾಣ ಪತ್ರವನ್ನು ಯಾರು ನೀಡಬೇಕು ಎಂಬ ಬಗ್ಗೆ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

5. ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ, 2000 ರ ಸೆಕ್ಷನ್ 5 ರಿಂದ ಈ ಕೆಳಕಂಡ ಕಾರ್ಯ ವಿಧಾನವನ್ನು ನಿಗಧಿಪಡಿಸಿದೆ.

1 ಸಂಬಂಧಿಸಿದ ಆಭ್ಯರ್ಥಿಯು ಯಾವ ಇತರೆ ಹಿಂದುಳಿದ ವರ್ಗಕ್ಕೆ (Other Backward Class) ಸೇರಿದ್ದಾನೆ (ಅದರಲ್ಲಿ ಅವನು ಮೇಲುಸ್ತರದ ಪರಿಕಲ್ಪನೆಯಡಿಯಲ್ಲಿ (Creamy Layer Concept) ಬರುವುದಿಲ್ಲವೆನ್ನುವುದು ಒಳಗೊಂಡಿರುತ್ತದೆ) ಎನ್ನುವ ಬಗ್ಗೆ ಸರ್ಕಾರ (ಅಂದರೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಸಮಾಜ ಕಲ್ಯಾಣ ಇಲಾಖೆ) ಕರ್ನಾಟಕ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿಗಳು ಮುಂತಾದವುಗಳ ಮೀಸಲಾತಿ)

ಅಧಿನಿಯಮ, 1990 ರ‍ಡಿಯಲ್ಲಿ ನಿಗಧಿಪಡಿಸಿದ ಕಾರ್ಯ ವಿಧಾನದ ಪ್ರಕಾರ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು. (ಇತರೆ ಹಿಂದುಳಿದ ವರ್ಗಕ್ಕೆ ಸೇರಿದ ಪ್ರವರ್ಗ– I ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ (Creamy Layer Concept) ಅನ್ವಯವಾಗುವುದಿಲ್ಲ). ಅಂದರೆ ಜನರಲ್ ಮೆರಿಟ್ ಸೇರಿದಂತೆ ಹಿಂದುಳಿದ ವರ್ಗಗಳಾದ ಪ್ರವರ್ಗ 2ಎ, ಪ್ರವರ್ಗ 2ಬಿ, ಪ್ರವರ್ಗ 3ಎ, ಮತ್ತು ಪ್ರವರ್ಗ 3ಬಿ ಅಭ್ಯರ್ಥಿಗಳಿಗೆ ಮೇಲುಸ್ತರದ ಪರಿಕಲ್ಪನೆ ಅನ್ವಯವಾಗುತ್ತದೆ.

2 ಜನರಲ್ ಮೆರಿಟ್ ವರ್ಗಕ್ಕೆ ಸೇರಿದ ಅಂದರೆ ಮೇಲುಸ್ತರದ ಪರಿಕಲ್ಪನೆಯ ವ್ಯಾಪ್ತಿಯಲ್ಲಿ ಬಾರದ ಗ್ರಾಮೀಣ ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಸೀಲ್ದಾರರವರಿಂದ ಈ ಆದೇಶಕ್ಕೆ ಲಗತ್ತಿಸಿದ ನಮೂನೆ–1 ರಲ್ಲಿ ಪಡೆಯತಕ್ಕದ್ದು.

6. ಸರ್ಕಾರಿ ಅಧಿಸೂಚನೆ ಸಂಖ್ಯೆ. ಸಿಆಸುಇ/71/ಸೆನೆನಿ/2001 ದಿನಾಂಕ: 24.10.2002 ರನ್ವಯ ಶೇಕಡಾ 5 ರಷ್ಟು ಹುದ್ದೆಗಳನ್ನು (10 ಹುದ್ದೆಗಳು) ಒಂದನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿರುವ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಆಧಾರವಾಗಿ ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗವನ್ನು ಲಗತ್ತಿಸುವುದು.

7. ಈ ಅಧಿಸೂಚನೆಯನ್ವಯ ಆಯ್ಕೆಯಾಗುವ ಅಭ್ಯರ್ಥಿಗಳು ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರತಕ್ಕದ್ದು.

8. ಈಗಾಗಲೇ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸುತ್ತಿರುವ ಪಶುವೈದ್ಯಾಧಿಕಾರಿಗಳು ಇತರೆ ಸಂಸ್ಥೆ ನಿಗಮಗಳಲ್ಲಿ ಸೇವೆ ಸಲ್ಲಿಸುತ್ತಿರುವವರು ಮೇಲಧಿಕಾರಿಗಳ ಮುಖಾಂತರ ನಿಗಧಿತ ಅವಧಿಯೊಳಗೆ ಅರ್ಜಿಗಳನ್ನು ತಲುಪುವಂತೆ ಸಲ್ಲಿಸತಕ್ಕದ್ದು.

9. **ಅರ್ಜಿಯೊಂದಿಗೆ ಲಗತ್ತಿಸಬೇಕಾದ ದೃಢೀಕೃತ ಜೆರಾಕ್ಸ್ ದಾಖಲಾತಿಗಳು:–**

(i) (ಎ) ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯ ಎಲ್ಲಾ ವರ್ಷಗಳ (ಸೆಮಿಸ್ಟರ್) ಅಂಕಪಟ್ಟಿಗಳು

(ಬಿ) ಸಂಬಂಧಪಟ್ಟ ವಿಶ್ವ ವಿದ್ಯಾನಿಲಯ ನೀಡಿರುವ ತ್ರೈಮಾಸಿಕ ಪದ್ಧತಿಯ ಅಂಕಪಟ್ಟಿಯ ಪರಿವರ್ತಕ ಕೋಷ್ಠಕ ಪ್ರಮಾಣ ಪತ್ರ (ಸರ್ಟಿಫಿಕೇಟ್‌ಗಳು)

(Trimester system's Marks card conversion certificate issued by the concerned University

(ii) ಚಾಲ್ತಿಯಲ್ಲಿರುವ ಪಶುವೈದ್ಯಕೀಯ ಪರಿಷತ್ತಿನ ನೋಂದಣಿ ಪ್ರಮಾಣ ಪತ್ರ

(iii) ಘಟಿಕೋತ್ಸವ ಪದವಿ ಪ್ರಮಾಣ ಪತ್ರ

(iv) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉಧೃತಾ ಭಾಗ

(v) ಅರ್ಜಿಯೊಂದಿಗೆ ಜಂಟಿ ನಿರ್ದೇಶಕರು (ಆಡಳಿತ) ಪದನಿಮಿತ್ತ ಸದಸ್ಯ ಕಾರ್ಯದರ್ಶಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ನಿರ್ದೇಶನಾಲಯ, ಬೆಂಗಳೂರು ರವರ ಹೆಸರಿಗೆ ಪಡೆದ ರೂ. 50/- **(ರೂ. ಐವತ್ತು ಮಾತ್ರ)** ಮೌಲ್ಯದ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ / ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ನಿಗಧಿತ ಶುಲ್ಕವನ್ನು ಸಂದಾಯ ಮಾಡತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಪ.ಜಾ., ಪ.ಪಂ., ಪ್ರವರ್ಗ–I ರವರಿಗೆ ಈ ಶುಲ್ಕವನ್ನು ಪಾವತಿಸುವುದಕ್ಕೆ ವಿನಾಯಿತಿ ಹೊಂದಿರುತ್ತಾರೆ.

(vi) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

(vii) ಪ.ಜಾ., ಪ.ಪಂ., ಪ್ರವರ್ಗ– I, ಪ್ರವರ್ಗ II ಎ, ಪ್ರವರ್ಗ II ಬಿ, ಪ್ರವರ್ಗ III ಎ, ಮತ್ತು ಪ್ರವರ್ಗ III ಬಿ ಮೀಸಲಾತಿ ಕೋರಿದ್ದಲ್ಲಿ ಸಂಬಂಧಿತ ಪ್ರಮಾಣ ಪತ್ರಗಳನ್ನು ಲಗತ್ತಿಸುವುದು.

(viii) ಕನ್ನಡ ಮಾಧ್ಯಮ/ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವವರು ಅವಶ್ಯ ದಾಖಲಾತಿ ಒದಗಿಸುವುದು.

(ix) ಈಗಾಗಲೇ ಸೇವೆಯಲ್ಲಿರುವ / ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿ ಗಳಾಗಿದ್ದಲ್ಲಿ ಅರ್ಜಿಗಳನ್ನು ಮೇಲಧಿಕಾರಿಗಳ ಮುಖಾಂತರ ಸಲ್ಲಿಸುವುದು ಹಾಗೂ ಷರತ್ತಿನ ರಾಜೀನಾಮೆ ಪತ್ರವನ್ನು ಲಗತ್ತಿಸುವುದು

(x) ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಗುಣ ಮತ್ತು ನಡತೆ ಪ್ರಮಾಣ ಪತ್ರಗಳು ದ್ವಿಪ್ರತಿಗಳಲ್ಲಿ

(xi) ಅರ್ಜಿಯಲ್ಲಿ ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಮೂರು ಭಾವಚಿತ್ರಗಳನ್ನು ಅಂಟಿಸಿರಬೇಕು.

10. ಅಭ್ಯರ್ಥಿಗಳು ಭರ್ತಿಮಾಡಿದ ಅರ್ಜಿಗಳನ್ನು ಎಲ್ಲಾ ಸಂಬಂಧಿಸಿದ ದಾಖಲಾತಿಗಳು / ಅಂಕಪಟ್ಟಿಗಳ ದ್ವಿಪ್ರತಿಗಳೊಂದಿಗೆ ಖುದ್ದಾಗಿ ಅಥವಾ ನೋಂದಣಿ ಅಂಚೆ ಮುಖಾಂತರ **ದಿನಾಂಕ:** 27.02.2004 **ರ ಸಂಜೆ** 5.00 **ಘಂಟೆಯೊಳಗೆ** 'ಸದಸ್ಯ ಕಾರ್ಯದರ್ಶಿಗಳು, ಇಲಾಖಾ ಆಯ್ಕೆ ಸಮಿತಿ, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವಾ ಇಲಾಖೆ ನಿರ್ದೇಶನಾಲಯ, 2ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಬೆಂಗಳೂರು–1,'ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ಯಾವುದೇ ಕಾರಣದಿಂದಾಗಿ ಅರ್ಜಿಯು ಇಲಾಖೆಗೆ ತಡವಾಗಿ ತಲುಪಿದ್ದಕ್ಕಾಗಿ ಅಥವಾ ಅರ್ಜಿಯು ತಲುಪದೇ ಇರುವುದಕ್ಕೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗಿರುವುದಿಲ್ಲ. ನಿಗಧಿತ ದಿನಾಂಕ ಮುಗಿದ ನಂತರ ಸಲ್ಲಿಸಿದ ಮೇಲ್ಕಂಡ ಅವಶ್ಯಕ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸದ ಮತ್ತು ಅರ್ಜಿಯ ನಿಗಧಿತ ಅಂಕಣಗಳಲ್ಲಿ ಸಹಿ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ದಿನಾಂಕವು ಬಂದ್/ಮುಷ್ಕರ ರಜೆಯಾಗಿದ್ದಲ್ಲಿ ಮಾರನೆಯ ದಿನವು ಕೊನೆಯ ದಿನಾಂಕವಾಗಿರುತ್ತದೆ.

11. ಅರ್ಜಿಗಳನ್ನೊಳಗೊಂಡ ಲಕೋಟೆಯ ಮೇಲೆ ''ಪಶುವೈದ್ಯಾಧಿಕಾರಿಗಳ ಹುದ್ದೆಗೆ ಅರ್ಜಿ''ಎಂದು ದಪ್ಪಕ್ಷರಗಳಲ್ಲಿ ಬರೆಯತಕ್ಕದ್ದು. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸ್ವೀಕೃತಿ ಪಡೆಯತಕ್ಕದ್ದು.

**ಎಂ.ಎಸ್. ಉಮೇಶ್‌ಚಂದ್ರ**
ಸದಸ್ಯ ಕಾರ್ಯದರ್ಶಿಗಳು
ಇಲಾಖಾ ನೇಮಕಾತಿ ಸಮಿತಿ
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ
ನಿರ್ದೇಶನಾಲಯ, ಬೆಂಗಳೂರು–1

## ನಮೂನೆ - 1

ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ

(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿಮಾಡಬೇಕಾದ ನಮೂನೆ)

ಗೆ:
ತಹಶೀಲ್ದಾರ್
—————————— ತಾಲ್ಲೂಕು
—————————— ಜಿಲ್ಲೆ

ಮಾನ್ಯರೇ,

ಶ್ರೀ/ಶ್ರೀಮತಿ —————————————————— ಎಂಬುವವರ ಮಗ/ಮಗಳು/ ಹೆಂಡತಿ/ಗಂಡ —————————————————— ಆದ ನಾನು ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

| | | | |
|---|---|---|---|
| 1. | ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ | | |
| 2. | ಅಭ್ಯರ್ಥಿಯ ಸ್ವಂತ ಸ್ಥಳ : | ಗ್ರಾಮ | |
| | | ತಾಲ್ಲೂಕು | |
| | | ಜಿಲ್ಲೆ | |
| 3. | ಅಭ್ಯರ್ಥಿಯ ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ | | |
| 4. | ಅಭ್ಯರ್ಥಿಯ ತಂದೆ/ತಾಯಿ/ಪೋಷಕರ/ಹೆಂಡತಿ/ ಗಂಡನ ಹೆಸರುಮತ್ತು ಉದ್ಯೋಗ | | |
| | ಉದ್ಯೋಗವು ಸರ್ಕಾರಿ: | ಅರೆ ಸರ್ಕಾರಿ | |
| | | ಸಾರ್ವಜನಿಕ ಉದ್ದಿಮೆ | |
| | | ಖಾಸಗಿ | |
| 5. | ಅಭ್ಯರ್ಥಿಯ ಪ್ರಸ್ತುತ ವಿಳಾಸ (ಸ್ಪಷ್ಟವಾಗಿ ನಮೂದಿಸುವುದು) | | |

| | | |
|---|---|---|
| 6. | ಅಭ್ಯರ್ಥಿಯ ಖಾಯಂ ಅಂಚೆ ವಿಳಾಸ | |
| 7. | ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು | |
| | ಪ್ರಾಥಮಿಕ | |
| | ಮಾಧ್ಯಮಿಕ | |
| | ಪ್ರೌಢ | |
| 8. | ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರು (ತಂದೆ/ತಾಯಿ ಜೀವಂತವಾಗಿದ್ದಲ್ಲಿ) ಹೆಂಡತಿ/ಗಂಡ ಇವರ ಒಟ್ಟು ವಾರ್ಷಿಕ ಆದಾಯ ಎಲ್ಲ ಮೂಲಗಳಿಂದ | |
| | 1. ವೇತನ (ವೇತನ ಶ್ರೇಣಿ | |
| | 2. ಜಮೀನಿನ ವಿವರಗಳು | |
| | 3. ಇತರೇ ಮೂಲಗಳಿಂದ | |
| 9. | ಆದಾಯ ತೆರಿಗೆ ಪಾವತಿದಾರರೇ? | |
| 10. | ಸಂಪತ್ತು ತೆರಿಗೆ ಪಾವತಿದಾರರೇ? | |
| 11. | ಮಾರಾಟ ತೆರಿಗೆ ಪಾವತಿದಾರರೇ? | |

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಲಾದ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಪ್ರಮಾಣೀಕರಿಸಿ ಘೋಷಿಸುತ್ತೇನೆ.

ಸ್ಥಳ :

ದಿನಾಂಕ:

ತಮ್ಮ ವಿಧೇಯ

(ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ತಂದೆ/ತಾಯಿ/ಪೋಷಕರ ಸಹಿ
(ತಂದೆ/ತಾಯಿ ಜೀವಂತವಾಗಿದ್ದಲ್ಲಿ)
ಹೆಂಡತಿ/ಗಂಡ ಇವರ ಸಹಿ

**ಇಬ್ಬರು ಸ್ಥಳೀಯ ಸಾಕ್ಷಿಗಳು**

ಅಭ್ಯರ್ಥಿಯ ಮತ್ತು ತಂದೆ/ತಾಯಿ/ಪೋಷಕರು/ಗಂಡ/ಹೆಂಡತಿ ಇವರನ್ನು ಹಾಗೂ ಇವರ ಸಹಿಯನ್ನು ನಾವು ಗುರುತಿಸುತ್ತೇವೆ:

ಸಾಕ್ಷಿಗಳ ಸಹಿ 1.

(ಪೂರ್ಣ ವಿಳಾಸದೊಂದಿಗೆ)

2.

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ : ________________________________________________ ಇವರ ಮಗ/ಮಗಳು/ಹೆಂಡತಿ/ಗಂಡ/ ಶ್ರೀ/ಶ್ರೀಮತಿ/ಕುಮಾರಿ ________________________________ ಎಂಬುವವರು ಕರ್ನಾಟಕ ರಾಜ್ಯದ ____________________________ ಜಿಲ್ಲೆಯ ವಿಭಾಗ _______________________ ಗ್ರಾಮ/ಪಟ್ಟಣ/ ನಗರದಲ್ಲಿ ಸಾಮನ್ಯ ನಿವಾಸಿಯಾಗಿದ್ದಾರೆಂದು ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ______________________________________________ ಇವರ ತಂದೆ/ತಾಯಿ/ ಪೋಷಕರು ಇವರು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ: 31.1.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರ್

ದಿನಾಂಕ: ____________ ತಾಲ್ಲೂಕು

**ಸೂಚನೆ–1**

ಇದರಲ್ಲಿ ಉಪಯೋಗಿಸಲಾಗಿರುವ "ಸಾಮಾನ್ಯ ನಿವಾಸಿ" ಎಂಬ ಪದವು 1950 ರ ಜನತಾ ಪ್ರಾತಿನಿಧ್ಯ ಕಾಯಿದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–1**

ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ. ಎಸ್ ಡಬ್ಲ್ಯೂಡಿ 251 ಬಿಸಿಎ 95, ಬೆಂಗಳೂರು ದಿನಾಂಕ: 31.1.1995 ರನ್ವಯ ಮೇಲುಸ್ತರ ದವರನ್ನು ಗುರುತಿಸಲು ನಿಗಧಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

**ನಮೂನೆ - 2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ ____________________________ ರವರ ಮಗ/ಮಗಳು/ಪತ್ನಿ ಶ್ರೀ/ಶ್ರೀಮತಿ/ಕುಮಾರಿ: __________________________ ಜಿಲ್ಲೆ ________ ತಾಲ್ಲೂಕು ___________ ಗ್ರಾಮದಲ್ಲಿ _______________ ವಾಸವಾಗಿರುವ ಇವರು ಒಂದನೇ ತರಗತಿಯಿಂದ ____________ ತರಗತಿಯವರೆಗೆ ________ ಜಿಲ್ಲೆ _________ ತಾಲ್ಲೂಕು _________ ಪಟ್ಟಣ ________ ಶಾಲೆಯಲ್ಲಿ ವ್ಯಾಸಂಗ ಮಾಡಿ __________ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಕರ್ನಾಟಕದ ಪೌರ–ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರ ಅಡಿಯಲ್ಲಿ ನಿರ್ಧಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿದೆ.

(ಸಹಿ)

ಮುಖ್ಯೋಪಾಧ್ಯಾಯರು

ಮೇಲರುಜು

ಕ್ಷೇತ್ರ ಶಿಕ್ಷಣ ಅಧಿಕಾರಿ

**Directorate of Animal Husbandry & Veterinary Services, 2nd Floor,**
**Sir. M. Vishveshwaraya Mini Tower, Dr. B.R. Ambedkar Road, Bangalore – 560 001**
**ನಿರ್ದೇಶನಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ೨ನೇ ಮಹಡಿ,**
**ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು – ೫೬೦ ೦೦೧**

## APPLICATION FOR DIRECT RECRUITMENT BY SELECTION
## ನೇರ ನೇಮಕಾತಿಗಾಗಿ ಅರ್ಜಿ ನಮೂನೆ

**ವಿಸೂ:**
1. ದಯವಿಟ್ಟು ದಿನಾಂಕ: ೨೨.೦೧.೨೦೦೪ ರ ಕರ್ನಾಟಕ ರಾಜ್ಯ ಪತ್ರವನ್ನು ಓದಲು ಮರೆಯದಿರಿ.
2. ಅರ್ಜಿಯೊಂದಿಗೆ ನೀಡುವ ತಾಳೆಪಟ್ಟಿಯಲ್ಲಿದ್ದಂತೆ ದಾಖಲಾತಿಗಳನ್ನು ಲಗತ್ತಿಸಲು ಮರೆಯದಿರಿ.
3. ಗಣಕೀಕರಿಸುವುದರಿಂದ ಅರ್ಜಿಯನ್ನು ಮಡಚುವುದು, ಕೊಳೆ ಮಾಡುವುದನ್ನು ತಪ್ಪಿಸಿ.

Paste your recent passport size photograph duly signed within this box only (Do not pin or staple) (Please affix your signature in the box below

NOTIFICATION NO. & DATE: ______________________________
ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ: ______________________________
POST APPLIED FOR ______________________________
(indicate here the post and department)
ಅರ್ಜಿ ಹಾಕಿದ ಹುದ್ದೆ ಮತ್ತು ಇಲಾಖೆಯ ಹೆಸರು : ______________________________

1. Name : (In capitals as in SSLC or X standard marks card)
ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ)

| | | | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |

2. Father's name / Husband's Name
ತಂದೆಯ / ಪತಿಯ ಹೆಸರು:

| | | | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | | | | | | | | | | | | | | | | |

3. Postal address : (In capitals)
ಅಂಚೆ ವಿಳಾಸ (ದಪ್ಪ ಅಕ್ಷರಗಳಲ್ಲಿ)

| | | | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| PHONE NO. | | | | | | | | | | | | | | | | | | | | PIN CODE | | | | | | | | | |

4. Permanent address: (In capitals)
ಖಾಯಂ ವಿಳಾಸ (ದಪ್ಪ ಅಕ್ಷರಗಳಲ್ಲಿ)

| | | | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| | | | | | | | | | | | | | | | | | | | | | | | | | | | | | |
| PHONE NO. | | | | | | | | | | | | | | | | | | | | PIN CODE | | | | | | | | | |

